# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2260

ಮಾನ್ಯ ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ ರಾಥೋಡ್ (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 21.03.2022

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಆರೋಗ್ಯ ಸಹಾಯವಾಣಿ 104 ಸ್ಥಗಿತಗೊಂಡಿರುವುದು ನಿಜವೇ; ನಿಜವಾದ್ದಲ್ಲಿ, ಸ್ಥಗಿತಗೊಂಡಿರುವುದಕ್ಕೆ ಕಾರಣವೇನು; | ರಾಜ್ಯದಲ್ಲಿ ಆರೋಗ್ಯ ಸಹಾಯವಾಣಿ 104 ಸ್ಥಗಿತಗೊಂಡಿರುವುದಿಲ್ಲ. 104 ಆರೋಗ್ಯ ಸಹಾಯವಾಣಿ ಟೆಂಡರ್ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಟೆಂಡರ್ ಪ್ರಕ್ರಿಯೆ ಮುಕ್ತಾಯವಾಗುವರೆಗೂ ತಾತ್ಕಾಲಿಕವಾಗಿ Transact BPO Service India Pvt, Ltd ಸಂಸ್ಥೆಯವರಿಗೆ ನಿರ್ವಹಣೆ ಮಾಡಲು ನೀಡಲಾಗಿರುತ್ತದೆ. |
| ಆ | 104 ಸಹಾಯವಾಣಿಯಿಂದ ಯಾವ ಯಾವ ಸೌಲಭ್ಯಗಳನ್ನು ಪಡೆಯಬಹುದಾಗಿದೆ; | ಆರೋಗ್ಯ ಸಲಹೆ, ಆಪ್ತ ಸಮಾಲೋಚನೆ, ಸೇವಾ ಸೌಲಭ್ಯಗಳ ಬಗ್ಗೆ ಮಾಹಿತಿ, ಆರೋಗ್ಯ ಸಂಸ್ಥೆ ಅಥವಾ ಸಿಬ್ಬಂದಿಯ ವಿರುದ್ಧ ದೂರು ದಾಖಲು ಸೇರಿದಂತೆ ಸಾಂಕ್ರಾಮಿಕ ರೋಗಗಳ ಬಗ್ಗೆ ಹಾಗೂ ಸಾಮಾನ್ಯ ಖಾಯಿಲೆಗಳಾದ ಕೆಮ್ಮು, ಶೀತ, ಜ್ವರ, ಹೊಟ್ಟೆ ನೋವು, ಸಕ್ಕರೆ ಕಾಯಿಲೆ, ಮೊಡವೆ, ಮುಂತಾದ ಆರೋಗ್ಯ ಸಮಸ್ಯೆಗಳಿಗೆ ಸೂಕ್ತ ಔಷಧಿಯ ಶಿಫಾರಸ್ಸು ಹಾಗೂ ಅವುಗಳ ಸೇವನೆಯ ಬಗ್ಗೆ 104 ಆರೋಗ್ಯ ಸಹಾಯವಾಣಿಯಿಂದ ಸೌಲಭ್ಯಗಳನ್ನು ಪಡೆಯಬಹುದಾಗಿದೆ. |
| ಇ | 104 ಸೇವೆಯನ್ನು ಪಡೆಯಲು ಬಿ.ಎಸ್.ಎನ್.ಎಲ್ ಕಂಪನಿಗೆ ಎಷ್ಟು ಮೊತ್ತದ ಬಾಕಿ ಉಳಿಸಿಕೊಳ್ಳಲಾಗಿದೆ; | Piramal Swasthya Management and Research Institute ಸಂಸ್ಥೆಯವರು 104 ಆರೋಗ್ಯ ಸಹಾಯವಾಣಿ ಕೇಂದ್ರವನ್ನು ನಡೆಸುತ್ತಿದ್ದು, ಸದರಿ ಸಂಸ್ಥೆಯವರಿಂದ ಬಿ.ಎಸ್.ಎನ್.ಎಲ್ ಕಂಪನಿಗೆ ಜನವರಿ–2022 ಮತ್ತು ಫೆಬ್ರವರಿ–2022 ತಿಂಗಳುಗಳ ವರೆಗೆ ರೂ.7,26,628/– ಮೊತ್ತ ಬಾಕಿ ಉಳಿಸಿಕೊಳ್ಳಲಾಗಿದೆ. ಸದರಿ ಮೊತ್ತವನ್ನು ಪಾವತಿಸುವ ಬಗ್ಗೆ ಪರಿಶೀಲನೆಯಲ್ಲಿದೆ. |
| ಈ | ಈ ಸಹಾಯವಾಣಿಯನ್ನು ಪುನರರಾಂಭಿಸುವುದು ಯಾವಾಗ? | 104 ಆರೋಗ್ಯ ಸಹಾಯವಾಣಿ ಟೆಂಡರ್ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಟೆಂಡರ್ ಪ್ರಕ್ರಿಯೆ ಮುಕ್ತಾಯವಾಗುವರೆಗೂ ತಾತ್ಕಾಲಿಕವಾಗಿ Transact BPO Service India Pvt, Ltd ಸಂಸ್ಥೆಯವರಿಗೆ ನಿರ್ವಹಣೆ ಮಾಡಲು ನೀಡಲಾಗಿರುತ್ತದೆ. |

ಆಕುಕ 85 ಎಸ್‌ಬಿವಿ 2022

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು